CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜನವರಿ ೧೩, ೨೦೦೫ (ಪುಷ್ಯ ೨೩, ಶಕ ವರ್ಷ ೧೯೨೬) | ಸಂಚಿಕೆ ೨ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ವಿಷಯ:** ೨೦೦೪–೨೦೦೫ನೇ ಶೈಕ್ಷಣಿಕ ಸಾಲಿಗೆ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:** (1) ದಿನಾಂಕ: 06-05-2004 ಸಂ. ಇಡಿ 01 ಯುಆರ್‌ಸಿ 2003ರ ಸರ್ಕಾರಿ ಆದೇಶ

(2) ದಿನಾಂಕ:22-06-2004 ಸಂ.ಇಡಿ 01 ಯುಆರ್‌ಸಿ 2003ರ ತಿದ್ದುಪಡಿ

(3) ದಿನಾಂಕ: 21-10-2004 ಸಂ. ಇಡಿ 156 ಯುಜಿವಿ 2004ರ ಸರ್ಕಾರಿ ಪತ್ರ.

(4) ದಿನಾಂಕ: 04-10-2004 ಸಂ. ಎಫ್9-1/ಎಸ್‌ಆರ್‌ಓ/ಎನ್‌ಸಿಟಿಇ/ 2003-04/7702ರ ಎನ್‌ಸಿಟಿಇಯ ಪ್ರಾದೇಶಿಕ ನಿರ್ದೇಶಕರ ಪತ್ರ.

**ಪೀಠಿಕೆ:**

೧) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ ೧೯೯೩ರ ೧೪ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ ೫೩(೧ಎ)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಟಿಸಿಹೆಚ್ ಮತ್ತು ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ ೨(೧)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ. ಅದರಂತೆ ದಿನಾಂಕ: ೦೬–೦೫–೨೦೦೪ರ ಸರ್ಕಾರಿ ಆದೇಶದಲ್ಲಿ ೨೦೦೩–೨೦೦೪ನೇ ಶೈಕ್ಷಣಿಕ ಸಾಲಿಗೆ ಬಿಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ನಿಗದಿಗೊಳಿಸಲಾಗಿತ್ತು.

೨) ೨೦೦೪–೨೦೦೫ನೇ ಶೈಕ್ಷಣಿಕ ಸಾಲಿನ ಬಿ.ಎಡ್ ಕೋರ್ಸಿನ ಸೀಟ್ ಮ್ಯಾಟ್ರಿಕ್ಸ್‌ನ್ನು ಪ್ರಕಟಿಸಲು ಅನುವಾಗುವಂತೆ ಎನ್‌ಸಿಟಿಇ ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳ ಪಟ್ಟಿಯನ್ನು ಅನುಮೋದಿತ ವಿದ್ಯಾರ್ಥಿ ಪ್ರಮಾಣದೊಂದಿಗೆ ತಕ್ಷಣ ಒದಗಿಸುವಂತೆ ಎನ್‌ಸಿಟಿಇ–ಎಸ್.ಆರ್.ಸಿಯ ಪ್ರಾದೇಶಿಕ ನಿರ್ದೇಶಕರನ್ನು ಕೋರಲಾಗಿತ್ತು. ಅದಕ್ಕೆ ಪ್ರತಿಕ್ರಿಯಿಸಿ ದಿನಾಂಕ: ೦೪–೧೦–೨೦೦೪ರ ಪತ್ರದಲ್ಲಿ ಎನ್‌ಸಿಟಿಇ–ಎಸ್.ಆರ್.ಸಿಯ ಪ್ರಾದೇಶಿಕ ನಿರ್ದೇಶಕರು ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳ ಪಟ್ಟಿಯನ್ನು ಅನುಮೋದಿತ ವಿದ್ಯಾರ್ಥಿ ಪ್ರಮಾಣದೊಂದಿಗೆ ಒದಗಿಸಿದ್ದಾರೆ.

3) ಗುಲ್ಬರ್ಗಾದ ಮಹಮ್ಮದಿ ಶಿಕ್ಷಣ ಮಹಾವಿದ್ಯಾಲಯವು 2003-2004ನೇ ಶೈಕ್ಷಣಿಕ ಸಾಲಿನಲ್ಲಿ ಸರ್ಕಾರಿ ಕೋಟಾದ 50 ಸೀಟುಗಳನ್ನು ಆಡಳಿತ ಮಂಡಳಿಯ ವತಿಯಿಂದ ಭರ್ತಿ ಮಾಡಿಕೊಂಡಿರುವುದಕ್ಕೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ದಿನಾಂಕ: 04-09-2004 ಸಂ.ಇಡಿ 54 ಯುಜಿವಿ 2004ರ ಸರ್ಕಾರಿ ಪತ್ರದಲ್ಲಿ ಸಕ್ರಮಗೊಳಿಸಲಾಗಿದೆ. ಈ ರೀತಿ ಸಕ್ರಮಗೊಳಿಸಿದ್ದರಿಂದಾಗಿ 2003-2004ನೇ ಶೈಕ್ಷಣಿಕ ವರ್ಷದಲ್ಲಿ 50 ಸರ್ಕಾರಿ ಕೋಟಾದ ಸೀಟುಗಳನ್ನು ಸರಿದೂಗಿಸಲು 2004-2005ನೇ ಶೈಕ್ಷಣಿಕ ವರ್ಷದಲ್ಲಿ ಈ ಶಿಕ್ಷಣ ಕಾಲೇಜಿಗೆ ನೀಡಲಾಗುವ 100 ಸೀಟುಗಳಿಗೆ ಎಲ್ಲಾ 100 ಸೀಟುಗಳನ್ನು ಸಹ ಸರ್ಕಾರಿ ಕೋಟಾದ ಸೀಟುಗಳಾಗಿ ಪರಿಗಣಿಸಲಾಗಿದೆ.

೪) ಈ ಹಿನ್ನೆಲೆಯಲ್ಲಿ, ಎನ್‌ಸಿಟಿಇ–ಎಸ್.ಆರ್.ಸಿಯು ವಿದ್ಯಾರ್ಥಿ ಪ್ರಮಾಣದೊಂದಿಗೆ ಒದಗಿಸಿರುವ ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳ ಪಟ್ಟಿಯ ವಿವರಗಳನ್ನಾಧರಿಸಿ ೨೦೦೪–೨೦೦೫ನೇ ಸಾಲಿಗೆ ಶಿಕ್ಷಣ ಕಾಲೇಜುಗಳಲ್ಲಿನ ಬಿಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆಯನ್ನು ಪರಿಶೀಲಿಸಲಾಗಿದೆ.

## ಸರ್ಕಾರಿ ಆದೇಶ ಸಂಖ್ಯೆ: ಇಡಿ 329 ಯುಆರ್‌ಸಿ 2004, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004

೪) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ ೨೦೦೦ದ ೫೯ನೇ ಪ್ರಕರಣದ (೧೮)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು ೧೯೯೮ರ ೨(೧)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ/ ವಿಶ್ವವಿದ್ಯಾಲಯ/ಅನುದಾನಿತ ಮತ್ತು ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸುತ್ತಿರುವ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ೨೦೦೪–೨೦೦೫ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಿರ್ದಿಷ್ಟಪಡಿಸಲಾಗಿದೆ. ಸದರಿ ಶಿಕ್ಷಣ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶವು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತವೆ.

1. ಕಾಲೇಜುಗಳು ಕೆ.ಎಸ್.ಯು ಅಧಿನಿಯಮ ೨೦೦೦ದ ೫೯(೧೮)ನೇ ಪ್ರಕರಣದಡಿ ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ಮಂಜೂರು ಮಾಡಿರುವ ಮುಂದುವರಿಕೆ ಸಂಯೋಜನೆಯನ್ನು ಹೊಂದಿರತಕ್ಕದ್ದು.
2. ವಿದ್ಯಾರ್ಥಿಗಳ ಪ್ರವೇಶವನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳನ್ವಯ ಕಟ್ಟು–ನಿಟ್ಟಾಗಿ ಪಡೆಯತಕ್ಕದ್ದು.
3. ಸದರಿ ೧೯೯೮ರ ನಿಯಮಗಳ ನಿಯಮ ೨(೧)ರ ಅಡಿಯಲ್ಲಿ ನಿರ್ಧರಿಸಲಾಗಿರುವ ವಿದ್ಯಾರ್ಥಿ ಪ್ರಮಾಣಕ್ಕೆ ಅನುಗುಣವಾಗಿ ಮತ್ತು ಪೂರಕವಾಗಿ ವಿಧಿಸಲಾಗುವ ಷರತ್ತುಗಳಿಗೊಳಪಟ್ಟು ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದು.
4. ಕಾಲೇಜುಗಳು ಎನ್‌ಸಿಟಿಇ ಅಧಿನಿಯಮ ೧೯೯೩ರ ೧೪ನೇ ಪ್ರಕರಣದಡಿ ಮಾನ್ಯತೆಯನ್ನು ಹೊಂದಿರತಕ್ಕದ್ದು.
5. ಕಾಲೇಜುಗಳು ಎನ್‌ಸಿಟಿಇ ಜಾರಿಗೊಳಿಸಿರುವ ನೋಟೀಸ್‌ನಲ್ಲಿ ನಿರ್ದಿಷ್ಟಪಡಿಸಲಾಗಿರುವ ಷರತ್ತುಗಳನ್ನು ಕಟ್ಟು–ನಿಟ್ಟಾಗಿ ಪೂರೈಸತಕ್ಕದ್ದು. ಎನ್‌ಸಿಟಿಇ ಮಾನ್ಯತೆ ಹೊಂದದ ಹೊರತು ಕಾಲೇಜು ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದಲ್ಲ.
6. ನಿರ್ದಿಷ್ಟ ವಿನಾಯಿತಿ ನೀಡದ ಹೊರತು ಸಂಬಂಧಪಟ್ಟ ವಿಶ್ವವಿದ್ಯಾಲಯ ಮಂಜೂರು ಮಾಡಿರುವ ಮುಂದುವರಿಕೆ ಸಂಯೋಜನೆ ಮತ್ತು ಎನ್‌ಸಿಟಿಇ ಮಂಜೂರು ಮಾಡಿರುವ ಮಾನ್ಯತೆ ರಹಿತವಾಗಿ ವಿದ್ಯಾರ್ಥಿಗಳ ಪ್ರವೇಶ ಪಡೆಯುವುದು ಕರ್ನಾಟಕ ಮಾನ್ಯತೆರಹಿತ ಮತ್ತು ಅಸಂಯೋಜಿತ ಶಿಕ್ಷಣ ಸಂಸ್ಥೆಗಳಿಗೆ ವಿದ್ಯಾರ್ಥಿಗಳ ಪ್ರವೇಶ ನಿಷೇಧ ಅಧಿನಿಯಮ ೧೯೮೪ರ ೩ನೇ ಪ್ರಕರಣದ ಉಲ್ಲಂಘನೆಯಾಗಿದ್ದು ಮೊಕದ್ದಮೆ ಹೂಡಲು ಆಕರ್ಷಿತವಾಗಿರುತ್ತದೆ.
7. ನಿಗದಿತ ವಿದ್ಯಾರ್ಥಿ ಪ್ರಮಾಣಕ್ಕಿಂತ ಹೆಚ್ಚುವರಿಯಾಗಿ ವಿದ್ಯಾರ್ಥಿಗಳ ಪ್ರವೇಶ ಪಡೆಯುವುದು ಕೆ.ಎಸ್.ಯು ಅಧಿನಿಯಮ ೨೦೦೦ದ ೬೦ನೇ ಪ್ರಕರಣದ ಉಲ್ಲಂಘನೆಯಲ್ಲದೆ ಮೇಲ್ಕಂಡ ೧೯೮೪ರ ಅಧಿನಿಯಮ ೪ನೇ ಪ್ರಕರಣದ ಉಲ್ಲಂಘನೆ ಸಹ ಆಗಿದ್ದು, ಮೊಕದ್ದಮೆ ಹೂಡಲು ಆಕರ್ಷಿತವಾಗುವುದಲ್ಲದೆ ಸಂಯೋಜನೆ ಹಿಂತೆಗೆದುಕೊಳ್ಳಲು ಸಕಾರಣವಾಗುತ್ತದೆ.

೫) ಗುಲ್ಬರ್ಗಾದ ಮಹಮ್ಮದಿ ಶಿಕ್ಷಣ ಮಹಾವಿದ್ಯಾಲಯವು ೨೦೦೩-೨೦೦೪ನೇ ಶೈಕ್ಷಣಿಕ ಸಾಲಿನಲ್ಲಿ ಸರ್ಕಾರಿ ಕೋಟಾದ ೫೦ ಸೀಟುಗಳನ್ನು ಸಂಸ್ಥೆಯ ವತಿಯಿಂದ ಭರ್ತಿ ಮಾಡಿಕೊಂಡಿರುವುದಕ್ಕೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ದಿನಾಂಕ: ೦೪-೦೯-೨೦೦೪ ಸಂ. ಇಡಿ ೫೪ ಯುಜಿವಿ ೨೦೦೪ರ ಸರ್ಕಾರಿ ಪತ್ರದಲ್ಲಿ ಸಕ್ರಮಗೊಳಿಸಲಾಗಿದೆ. ಈ ರೀತಿ ಸಕ್ರಮಗೊಳಿಸಿದ್ದರಿಂದಾಗಿ ೨೦೦೩-೨೦೦೪ನೇ ಶೈಕ್ಷಣಿಕ ವರ್ಷದಲ್ಲಿ ೫೦ ಸರ್ಕಾರಿ ಕೋಟಾದ ಸೀಟುಗಳನ್ನು ಸರಿದೂಗಿಸಲು ೨೦೦೪-೨೦೦೫ನೇ ಶೈಕ್ಷಣಿಕ ವರ್ಷದಲ್ಲಿ ಮೇಲ್ಕಂಡ ಕಾಲೇಜಿಗೆ ನೀಡಲಾಗುವ ೧೦೦ ಸೀಟುಗಳಿಗೆ ಎಲ್ಲಾ ೧೦೦ ಸೀಟುಗಳನ್ನು ಸರ್ಕಾರಿ ಕೋಟಾದ ಸೀಟುಗಳನ್ನಾಗಿ ಪರಿಗಣಿಸಲಾಗಿದೆ. ಆದ್ದರಿಂದ ಸದರಿ ಕಾಲೇಜಿನಲ್ಲಿ ಎಲ್ಲಾ ೧೦೦ ಸೀಟುಗಳನ್ನು ಸರ್ಕಾರಿ ಪ್ರವರ್ಗದ ಸೀಟುಗಳೆಂದು ಪರಿಗಣಿಸಿ ಕೇಂದ್ರೀಕೃತ ದಾಖಲಾತಿ ಘಟಕದ ಮೂಲಕ ಅಭ್ಯರ್ಥಿಗಳನ್ನು ಹಂಚಿಕೆ ಮಾಡಿ ಭರ್ತಿ ಮಾಡತಕ್ಕದ್ದು.

೬) ಕೇಂದ್ರೀಕೃತ ಪ್ರವೇಶ ಘಟಕದ ವಿಶೇಷಾಧಿಕಾರಿಯವರು ಈ ಆದೇಶದಲ್ಲಿನ ಅನುಬಂಧದಲ್ಲಿ ನಿರ್ದಿಷ್ಠಪಡಿಸಲಾಗಿರುವ ಎನ್.ಸಿ.ಟಿ.ಇ ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳಿಗೆ ಮಾತ್ರ ಎನ್‌ಸಿಟಿಇ ಅನುಮೋದಿಸಿರುವ ವಿದ್ಯಾರ್ಥಿ ಪ್ರಮಾಣದ ಮಿತಿಯಲ್ಲಿ ೧೯೯೮ರ ನಿಯಮಗಳ ನಿಯಮ ೨ (ಜೆ)ಯಲ್ಲಿ ನಿಗದಿಪಡಿಸಿರುವ ಪ್ರಮಾಣದಲ್ಲಿ ಅಭ್ಯರ್ಥಿಗಳನ್ನು ವಿತರಣೆ ಮಾಡತಕ್ಕದ್ದು. ಆದರೆ ಸಿಎಸಿಯ ಪ್ರವೇಶ ಪ್ರಕ್ರಿಯೆ ಮುಕ್ತಾಯಗೊಳ್ಳುವ ಮುನ್ನ ಎನ್‌ಸಿಟಿಇ ವಿದ್ಯಾರ್ಥಿ ಪ್ರಮಾಣವನ್ನು ನಿರ್ದಿಷ್ಠಪಡಿಸಿ ಮಾನ್ಯತೆಯನ್ನು ನೀಡಿದಲ್ಲಿ ಕೇಂದ್ರೀಕೃತ ಪ್ರವೇಶ ಘಟಕವು ಅಂತಹ ಕಾಲೇಜುಗಳಿಗೆ ಮಂಜೂರಾದ ವಿದ್ಯಾರ್ಥಿ ಪ್ರಮಾಣದ ಮಿತಿಯಲ್ಲಿ ನಿರ್ದಿಷ್ಠಪಡಿಸಿರುವ ಕೋಟಾ ನಿಯಮವನ್ನು ಅನುಸರಿಸಿ ವಿದ್ಯಾರ್ಥಿಗಳನ್ನು ವಿತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು).

### ಅನುಬಂಧ

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| 1 | 2 | 3 | 4 |
| | **ಬೆಂಗಳೂರು ಜಿಲ್ಲೆ** | | |
| 1 | ಆರ್.ವಿ. ಟೀಚರ್ಸ್ ಕಾಲೇಜು, ಜಯನಗರ, ಬೆಂಗಳೂರು | ೧೦೦ | |
| 2 | ಎಂ.ಇ.ಎಸ್. ಕಾಲೇಜ್ ಆಫ್ ಎಜುಕೇಷನ್, ಮಲ್ಲೇಶ್ವರಂ, ಬೆಂಗಳೂರು | ೧೦೦ | |
| 3 | ವಿಜಯಾ ಟೀಚರ್ಸ್ ಕಾಲೇಜು, ಜಯನಗರ, ಬೆಂಗಳೂರು | ೧೦೦ | |
| 4 | ಬಿ.ಇ.ಎಸ್. ಕಾಲೇಜ್ ಆಫ್ ಎಜುಕೇಷನ್, ಜಯನಗರ, ಬೆಂಗಳೂರು | ೧೦೦ | |
| 5 | ಡಾ: ಅಂಬೇಡ್ಕರ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | ೧೦೦ | |
| 6 | ನ್ಯೂ ಹಾರಿಜನ್ ಕಾಲೇಜ್ ಆಫ್ ಎಜುಕೇಷನ್, ಇಂದಿರಾನಗರ, ಬೆಂಗಳೂರು | ೧೦೦ | |
| 7 | ಎಂ.ವಿ.ಜೆ. ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | ೧೦೦ | |

| 1 | 2 | 3 | 4 |
|---|---|---|---|
| 8 | ಶ್ರೀ ಸರ್ವಜ್ಞ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | ೧೦೦ | |
| 9 | ಎಸ್.ಜೆ.ಇ.ಎಸ್. ಕಾಲೇಜ್ ಆಫ್ ಎಜುಕೇಷನ್, ಮೇಡಹಳ್ಳಿ, ಬೆಂಗಳೂರು | ೧೦೦ | |
| 10 | ಅಲ್–ಅಮೀನ್ ಕಾಲೇಜ್ ಆಫ್ ಎಜುಕೇಷನ್, ಲಾಲ್‌ಬಾಗ್ ಎದುರು ಬೆಂಗಳೂರು | ೧೦೦ | |
| 11 | ಸಂಜಯಗಾಂಧಿ ಕಾಲೇಜ್ ಆಫ್ ಎಜುಕೇಷನ್, ಜ್ಞಾನನಗರ, ಬೆಂಗಳೂರು | ೧೦೦ | |
| 12 | ರಾಜಾಜಿನಗರ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | ೧೦೦ | |
| | **ಕೋಲಾರ ಜಿಲ್ಲೆ** | | |
| 13 | ಮುನಿಸಿಪಾಲ್ ಕಾಲೇಜ್ ಆಫ್ ಎಜುಕೇಷನ್, ಚಿಕ್ಕಬಳ್ಳಾಪುರ | ೧೦೦ | |
| 14 | ಕೆ.ಎನ್. ವೆಂಕಟಪತೆಪ್ಪ ಕಾಲೇಜ್ ಆಫ್ ಎಜುಕೇಷನ್, ಚಿಕ್ಕಬಳ್ಳಾಪುರ | ೧೦೦ | |
| 15 | ಗೋಲ್ಡ್ ಫೀಲ್ಡ್ ಕಾಲೇಜ್ ಆಫ್ ಎಜುಕೇಷನ್, ಬಂಗಾರಪೇಟೆ | ೧೦೦ | |
| | **ತುಮಕೂರು ಜಿಲ್ಲೆ** | | |
| 16 | ಸಿದ್ಧಾರ್ಥ ಕಾಲೇಜ್ ಆಫ್ ಎಜುಕೇಷನ್, ತುಮಕೂರು | ೧೦೦ | |
| 17 | ಸಿದ್ಧಗಂಗಾ ಕಾಲೇಜ್ ಆಫ್ ಎಜುಕೇಷನ್, ತುಮಕೂರು | ೧೦೦ | |
| 18 | ಕೆ.ಎಸ್.ಇ.ಎಫ್ ಕಾಲೇಜ್ ಆಫ್ ಎಜುಕೇಷನ್, ತುಮಕೂರು | ೧೦೦ | |
| 19 | ಇಂದಿರಾ ಕಾಲೇಜ್ ಆಫ್ ಎಜುಕೇಷನ್, ತುಮಕೂರು | ೧೦೦ | |
| 20 | ಟಿ.ವಿ.ವಿ. ಕಾಲೇಜ್ ಆಫ್ ಎಜುಕೇಷನ್, ಮದುಗಿರಿ | ೧೦೦ | |
| | **ಮೈಸೂರು ವಿಶ್ವವಿದ್ಯಾಲಯ** | | |
| 21 | ಗೌರ್ನಮೆಂಟ್ ಕಾಲೇಜ್ ಆಫ್ ಎಜುಕೇಷನ್, ಮೈಸೂರು | ೧೦೦ | |
| 22 | ಶಾರದ ವಿಲಾಸ ಟೀಚರ್ಸ್ ಕಾಲೇಜು, ಮೈಸೂರು | ೧೦೦ | |
| 23 | ಇನ್ಸ್ಟಿಟ್ಯೂಟ್ ಆಫ್ ಎಜುಕೇಷನ್ ಕಾಲೇಜು, ಕುವೆಂಪು ನಗರ, ಮೈಸೂರು | ೧೦೦ | |
| 24 | ಸ್ಟೆಂಟ್. ಜೋಸೆಫ್ಸ್ ಕಾಲೇಜ್ ಆಫ್ ಎಜುಕೇಷನ್, ಜಯಲಕ್ಷ್ಮಿಪುರಂ, ಮೈಸೂರು | ೧೦೦ | |
| 25 | ಕಾಗಿನೆಲೆ ಮಹಾಸಂಸ್ಥಾನ ಕನಕಗುರು ಪೀಟ ಕಾಲೇಜ್ ಆಫ್ ಎಜುಕೇಷನ್, ಮೈಸೂರು. | ೧೦೦ | |
| | **ಮಂಡ್ಯ ಜಿಲ್ಲೆ** | | |
| 26 | ಶಂಕರೇಗೌಡ ಕಾಲೇಜ್ ಆಫ್ ಎಜುಕೇಷನ್, ಮಂಡ್ಯ | ೧೦೦ | |
| | **ಹಾಸನ ಜಿಲ್ಲೆ** | | |
| 27 | ಶ್ರೀ ಆದಿ ಚುಂಚನಗಿರಿ ಕಾಲೇಜ್ ಆಫ್ ಎಜುಕೇಷನ್ ಚನ್ನರಾಯಪಟ್ಟಣ | ೧೦೦ | |
| 28 | ವಿವೇಕಾನಂದ ಕಾಲೇಜ್ ಆಫ್ ಎಜುಕೇಷನ್ ಅರಸೀಕೆರೆ | ೧೦೦ | |
| 29 | ಹಾಸನಾಂಬ ಕಾಲೇಜ್ ಆಫ್ ಎಜುಕೇಷನ್, ಹಾಸನ | ೧೦೦ | |
| 30 | ಬಿಆರ್.ಡಿ.ಎಂ ಕಾಲೇಜ್ ಆಫ್ ಎಜುಕೇಷನ್, ಸಕಲೇಶಪುರ | ೧೦೦ | |
| | **ಕುವೆಂಪು ವಿಶ್ವವಿದ್ಯಾಲಯ**<br>**ಚಿತ್ರದುರ್ಗ ಜಿಲ್ಲೆ** | | |
| 31 | ಗೌರ್ನಮೆಂಟ್ ಕಾಲೇಜ್ ಆಫ್ ಎಜುಕೇಷನ್, ಚಿತ್ರದುರ್ಗ | ೧೦೦ | |
| 32 | ಶ್ರೀ ವೆಂಕಟೇಶ್ವರ ಕಾಲೇಜ್ ಆಫ್ ಎಜುಕೇಷನ್, ಸ್ಟೇಡಿಯಂ ರೋಡ್, ಚಿತ್ರದುರ್ಗ. | ೧೦೦ | |
| | **ದಾವಣಗೆರೆ ಜಿಲ್ಲೆ** | | |
| 33 | ಎಂ.ಎಂ. ಕಾಲೇಜ್ ಆಫ್ ಎಜುಕೇಷನ್, ದಾವಣಗೆರೆ | ೧೦೦ | |
| 34 | ಬಿಇಎ ಕಾಲೇಜ್ ಆಫ್ ಎಜುಕೇಷನ್, ದಾವಣಗೆರೆ | ೧೦೦ | |
| 35 | ಶ್ರೀ ಶೈಲಾ ಕಾಲೇಜ್ ಆಫ್ ಎಜುಕೇಷನ್, ಹರಿಹರ | ೧೦೦ | |
| 36 | ಟಿಎಂಎಇ ಕಾಲೇಜ್ ಆಫ್ ಎಜುಕೇಷನ್, ಹರಪನಹಳ್ಳಿ | ೧೦೦ | |
| | **ಶಿವಮೊಗ್ಗ ಜಿಲ್ಲೆ** | | |
| 37 | ನ್ಯಾಷನಲ್ ಕಾಲೇಜ್ ಆಫ್ ಎಜುಕೇಷನ್, ಶಿವಮೊಗ್ಗ | ೧೦೦ | |
| 38 | ಕುಮದ್ವತಿ ಕಾಲೇಜ್ ಆಫ್ ಎಜುಕೇಷನ್, ಶಿಕಾರಿಪುರ | ೧೦೦ | |
| | **ಚಿಕ್ಕಮಗಳೂರು ಜಿಲ್ಲೆ** | | |
| 39 | ಎಂಎಲ್‌ಎಂಎನ್ ಕಾಲೇಜ್ ಆಫ್ ಎಜುಕೇಷನ್, ಚಿಕ್ಕಮಗಳೂರು | ೧೦೦ | |
| | **ದಕ್ಷಿಣ ಕನ್ನಡ ಜಿಲ್ಲೆ** | | |
| 40 | ಗೌರ್ನಮೆಂಟ್ ಕಾಲೇಜ್ ಆಫ್ ಎಜುಕೇಷನ್, ಮಂಗಳೂರು | ೧೦೦ | |
| 41 | ಸ್ಟೆಂಟ್ ಆನ್ಸ್ ಕಾಲೇಜ್ ಆಫ್ ಎಜುಕೇಷನ್, ಮಂಗಳೂರು | ೧೦೦ | |

| 1 | 2 | 3 | 4 |
|---|---|---|---|
| | **ಉಡುಪಿ ಜಿಲ್ಲೆ** | | |
| 42 | ಡಾ: ಟಿಎಂಎ ಪೈ ಕಾಲೇಜ್ ಆಫ್ ಎಜುಕೇಷನ್, ಉಡುಪಿ | ೧೦೦ | |
| | **ಕೊಡಗು ಜಿಲ್ಲೆ** | | |
| 43 | ಸರ್ವೋದಯ ಕಾಲೇಜ್ ಆಫ್ ಎಜುಕೇಷನ್, ವಿರಾಜ್‌ಪೇಟೆ, ಕೊಡಗು | ೧೦೦ | |
| | **ಧಾರವಾಡ ಜಿಲ್ಲೆ** | | |
| 44 | ಯೂನಿವರ್ಸಿಟಿ ಕಾಲೇಜ್ ಆಫ್ ಎಜುಕೇಷನ್, ಧಾರವಾಡ | ೧೦೦ | |
| 45 | ಕೆ.ಎಲ್.ಇ. ಕಾಲೇಜ್ ಆಫ್ ಎಜುಕೇಷನ್, ಹುಬ್ಬಳ್ಳಿ | ೧೦೦ | |
| 46 | ಜಯನಗರ ಕಾಲೇಜ್ ಆಫ್ ಎಜುಕೇಷನ್, ಹುಬ್ಬಳ್ಳಿ | ೧೦೦ | |
| | **ಬೆಳಗಾಂ ಜಿಲ್ಲೆ** | | |
| 47 | ಗೌರ್ನಮೆಂಟ್ ಕಾಲೇಜ್ ಆಫ್ ಎಜುಕೇಷನ್, ಬೆಳಗಾಂ | ೧೦೦ | |
| 48 | ಕೆ.ಎಸ್.ಆರ್. ಕಾಲೇಜ್ ಆಫ್ ಎಜುಕೇಷನ್, ಬೆಳಗಾಂ | ೧೦೦ | |
| 49 | ಕೆ.ಆರ್.ಇ.ಸಿ.ಎಸ್. ಕಾಲೇಜ್ ಆಫ್ ಎಜುಕೇಷನ್, ಬೈಲಹೊಂಗಲ | ೧೦೦ | |
| 50 | ಚೌಸನ್ ಕಾಲೇಜ್ ಆಫ್ ಎಜುಕೇಷನ್, ಚಿಕ್ಕೋಡಿ | ೧೦೦ | |
| 51 | ಜೈನ ಮಹಿಳಾ ಮಂಡಲ್ಸ್ ಬಿ.ಎಡ್ ಕಾಲೇಜ್ ಫಾರ್ ಉಮೆನ್, ಬಾಲಿಕ ಆದರ್ಶ ವಿದ್ಯಾಲಯ ಪ್ರೋಸ್ಟ್, ತಿಲಕವಾಡಿ, ಬೆಳಗಾಂ | ೧೦೦ | |
| | **ಉತ್ತರ ಕನ್ನಡ ಜಿಲ್ಲೆ** | | |
| 52 | ಕಮಲಾ ಬಾಳಿಗಾ ಕಾಲೇಜ್ ಆಫ್ ಎಜುಕೇಷನ್, ಕುಮಟ | ೧೦೦ | |
| 53 | ಶಿವಾಜಿ ಕಾಲೇಜ್ ಆಫ್ ಎಜುಕೇಷನ್, ಕಾರವಾರ | ೧೦೦ | |
| | **ಬಿಜಾಪುರ ಜಿಲ್ಲೆ** | | |
| 54 | ಬಿಎಲ್‌ಡಿಇಎಸ್ ಜೆ.ಎಸ್.ಎಸ್. ಕಾಲೇಜ್ ಆಫ್ ಎಜುಕೇಷನ್, ಬಿಜಾಪುರ | ೧೦೦ | |
| 55 | ಗೌರ್ನಮೆಂಟ್ ಕಾಲೇಜ್ ಆಫ್ ಎಜುಕೇಷನ್, ಜಮಖಂಡಿ | ೧೦೦ | |
| 56 | ಅಂಜುಮನ್-ಇ-ಇಸ್ಲಾಂ ಕಾಲೇಜ್ ಆಫ್ ಎಜುಕೇಷನ್, ಬಿಜಾಪುರ | ೧೦೦ | |
| | **ಗದಗ ಜಿಲ್ಲೆ** | | |
| 57 | ಜಗದ್ಗುರು ಪಂಚಾಚಾರ್ಯ ಕಾಲೇಜ್ ಆಫ್ ಎಜುಕೇಷನ್, ಗದಗ. | ೧೦೦ | |
| | **ಹಾವೇರಿ ಜಿಲ್ಲೆ** | | |
| 58 | ಶ್ರೀ ಕುಮಾರೇಶ್ವರ ಕಾಲೇಜ್ ಆಫ್ ಎಜುಕೇಷನ್, ಹಾನಗಲ್ | ೧೦೦ | |
| | **ಬಾಗಲ್‌ಕೋಟೆ ಜಿಲ್ಲೆ** | | |
| 59 | ಎಸ್.ಆರ್. ಕಂಟಿ ಕಾಲೇಜ್ ಆಫ್ ಎಜುಕೇಷನ್, ಇಳಕಲ್ | ೧೦೦ | |
| | **ಗುಲಬರ್ಗ ಜಿಲ್ಲೆ** | | |
| 60 | ಗೌರ್ನಮೆಂಟ್ ಕಾಲೇಜ್ ಆಫ್ ಎಜುಕೇಷನ್, ಗುಲಬರ್ಗ | ೧೦೦ | |
| 61 | ಮೊಹಮ್ಮದಿ ಕಾಲೇಜ್ ಆಫ್ ಎಜುಕೇಷನ್, ಗುಲಬರ್ಗ | ೧೦೦ | (ಈ ಎಲ್ಲಾ ೧೦೦ ಸೀಟುಗಳನ್ನು ಸರ್ಕಾರಿ ಪ್ರವರ್ಗದ ಸೀಟುಗಳೆಂದು ಪರಿಗಣಿಸಿ ಕೇಂದ್ರೀಕೃತ ದಾಖಲಾತಿ ಘಟಕದ ಮೂಲಕ ಅಭ್ಯರ್ಥಿ ಗಳನ್ನುಪ್ರಾಯೋಜಿಸಿ ಭರ್ತಿಮಾಡತಕ್ಕದ್ದು) |
| 62 | ಚಾಂದ್‌ಬೀಬೀ ಕಾಲೇಜ್ ಆಫ್ ಎಜುಕೇಷನ್, ಗುಲಬರ್ಗ | ೧೦೦ | |
| 63 | ಜವಹಾರ್ ಕಾಲೇಜ್ ಆಫ್ ಎಜುಕೇಷನ್, ಯಾದಗಿರಿ | ೧೦೦ | |
| | **ರಾಯಚೂರ್ ಜಿಲ್ಲೆ** | | |
| 64 | ಎಸ್.ಆರ್.ಕೆ. ಕಾಲೇಜ್ ಆಫ್ ಎಜುಕೇಷನ್, ರಾಯಚೂರ್ | ೧೦೦ | |
| | **ಬಳ್ಳಾರಿ ಜಿಲ್ಲೆ** | | |
| 65 | ಕೊಟ್ಟೂರುಸ್ವಾಮಿ ಕಾಲೇಜ್ ಆಫ್ ಎಜುಕೇಷನ್, ಬಳ್ಳಾರಿ | ೧೦೦ | |
| | **ಬೀದರ್ ಜಿಲ್ಲೆ** | | |
| 66 | ಬಿಲ್ಲಾಳ್ ಕಾಲೇಜ್ ಆಫ್ ಎಜುಕೇಷನ್, ಬೀದರ್ | ೧೦೦ | |
| 67 | ಹೆಚ್.ಕೆ.ಇ. ಸೊಸೈಟೀಸ್ ಬಸವೇಶ್ವರ ಕಾಲೇಜ್ ಆಫ್ ಎಜುಕೇಷನ್, ಬೀದರ್ | ೧೦೦ | |
| | **ಕೊಪ್ಪಳ್ ಜಿಲ್ಲೆ** | | |
| 68 | ಟಿ.ಎಂ.ಎ.ಇ ಕಾಲೇಜ್ ಆಫ್ ಎಜುಕೇಷನ್, ಗಂಗಾವತಿ | ೧೦೦ | |

ಪಿ.ಆರ್. 2

**ಸುಂದರ ರಾಜ ಗುಪ್ತ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು).

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಆದರ್ಶ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ತೊಕೆಪುರ / 2004 / 2091, ದಿನಾಂಕ : 8.11.2004.

2. ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಆದರ್ಶ ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಗುಲ್ಬರ್ಗ ಜಿಲ್ಲೆಯ ಶಹಪುರ ತಾಲ್ಲೂಕಿನ NLBCಯ ಸಹಪುರ ಬ್ರಾಂಚ್ ಕೆನಾಲ್‌ಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 396 ಎನ್‌ಸಿಇ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಆದರ್ಶ ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ, ಗುಲ್ಬರ್ಗ ಜಿಲ್ಲೆಯ ಶಹಪುರ ತಾಲ್ಲೂಕಿನ NLBCಯ ಶಹಪುರ ಬ್ರಾಂಚ್ ಕೆನಾಲ್‌ಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ತೊಕಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಅರಣ್ಯ, ಜಲ ಸಂಪನ್ಮೂಲ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 3

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಮಾಗಿಬೈಲ್ ಎಂಟರ್‌ಪ್ರೈಸಸ್ ಕಂಪನಿಗೆ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಮಾಗಿಬೈಲು / 2004 / 2971, ದಿನಾಂಕ : 2.11.2004.

2. ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಮಾಗಿಬೈಲು ಎಂಟರ್‌ಪ್ರೈಸಸ್ ಈ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲ್ಲೂಕಿನ ಕಿಗ್ಗ ಹೋಬಳಿಯ ಯಡದಹಳ್ಳಿ ಬಳಿ ಮಾಗಿಬೈಲು ಫಾಲ್ಸ್‌ಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 375 ಎನ್‌ಸಿಇ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಮಾಗಿಬೈಲು ಎಂಟರ್‌ಪ್ರೈಸಸ್ ಈ ಕಂಪನಿಗೆ, ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲ್ಲೂಕಿನ ಕಿಗ್ಗ ಹೋಬಳಿಯ ಯಡದಹಳ್ಳಿ ಬಳಿ ಮಾಗಿಬೈಲು ಫಾಲ್ಸ್‌ಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (ಲಾಂಜಿಟ್ಯೂಡ್ 75-22'-22.82" ಪೂರ್ವ ಮತ್ತು ಲ್ಯಾಟಿಟ್ಯೂಡ್ 13-24'-67.7" ಉತ್ತರ) ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಅರಣ್ಯ, ಜಲ ಸಂಪನ್ಮೂಲ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 4

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆಯನ್ನು ಬೆಳಗಾಂವ್‌ನಲ್ಲಿ ಮತ್ತು ಅದರ ಉಪ ಕೇಂದ್ರವನ್ನು ಮಂಡ್ಯದಲ್ಲಿ ಸ್ಥಾಪನೆ - ಮಂಡ್ಯ ಉಪ ಕೇಂದ್ರ ಸ್ಥಾಪನೆಗೆ ಕಾವೇರಿ ಜಲಾನಯನ ಯೋಜನೆ, ಮೈಸೂರು ಕಾಡಾ ಪ್ರಾಧಿಕಾರದ ಸಾತನೂರು ಫಾರಂ ಜಮೀನು ನೀಡುವ ಕುರಿತು - ಆದೇಶ

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ ಸಿಐ 193 ಎಸ್‌ಜಿಎಫ್ 94 (ಪಿ), ದಿನಾಂಕ: 8.10.2003.
2. ಕರ್ನಾಟಕ ಸಕ್ಕರೆ ಸಂಸ್ಥೆ ವಿಶೇಷ ಕರ್ತವ್ಯಾಧಿಕಾರಿಯವರ ಪತ್ರ ಸಂಖ್ಯೆ ಕಸಸಂ:ಕಾಕ:ಮಂಉಪಕೇ:03-04:567, ದಿನಾಂಕ:20.10.2003.
3. ಕರ್ನಾಟಕ ಸಕ್ಕರೆ ಸಂಸ್ಥೆ ನಿರ್ದೇಶಕರ ಪತ್ರ ಸಂಖ್ಯೆ: ಕಸಸಂ:ಕಾಕ:ಮಂಉಪಕೇ:03-04, ದಿನಾಂಕ:9.2.2004.
4. ಆಡಳಿತಾಧಿಕಾರಿ, ಕಾಡಾ ಕಾವೇರಿ ಜಲಾನಯನ ಯೋಜನೆ, ಮೈಸೂರು ರವರ ಪತ್ರ ಸಂಖ್ಯೆ: ಕಾಡಾ: ಕಾಜಯೋ:ಕೃಷಿ(2):6:2003-04, ದಿನಾಂಕ:20.12.2003.

5. ಸರ್ಕಾರದ ಆದೇಶ ಸಂಖ್ಯೆ: ಎಎಹೆಚ್ 1 ಎಎಂಎಲ್ 85, ದಿನಾಂಕ 25.7.1985.
6. ಕಾವೇರಿ ಕಾಡಾ, ಮೈಸೂರು ಆಡಳಿತಾಧಿಕಾರಿಯವರ ಪತ್ರ ಸಂಖ್ಯೆ ಕಾಡಾ:ಕಾಜಯೋ:ಕೃಷಿ (2):6:2003-04, ದಿನಾಂಕ:19.7.2004.

**ಪ್ರಸ್ತಾವನೆ:**

ಮೇಲೆ ಓದಲಾದ-1ರ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿ ಸಕ್ಕರೆ ಉದ್ಯಮದ ಏಳಿಗೆಗಾಗಿ ಹಾಗೂ ರೈತರ ಶ್ರೇಯೋಭಿವೃದ್ಧಿಯನ್ನು ಹೆಚ್ಚಿಸುವ ದೃಷ್ಟಿಯಿಂದ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1980 ರಡಿಯಲ್ಲಿ ನೊಂದಾಯಿತ "ಕರ್ನಾಟಕ ಸಕ್ಕರೆ ಸಂಸ್ಥೆ" ಯನ್ನು ಬೆಳಗಾಂನಲ್ಲಿ ಮತ್ತು ಅದರ ಉಪ ಕೇಂದ್ರವನ್ನು ಮಂಡ್ಯದಲ್ಲಿ ಸ್ಥಾಪಿಸಲು ಆದೇಶವನ್ನು ಹೊರಡಿಸಲಾಗಿದೆ. ಈ ಸಂಸ್ಥೆ ಹಾಗೂ ಉಪ ಕೇಂದ್ರ ಸ್ಥಾಪನೆಗೆ ಬೇಕಾಗುವ ಜಮೀನನ್ನು ಬೆಳಗಾಂವ್ ಜಿಲ್ಲೆಯಲ್ಲಿ 200-00 ಎಕರೆ ಮತ್ತು ಮಂಡ್ಯ ಜಿಲ್ಲೆಯಲ್ಲಿ 100-00 ಎಕರೆ ಸರ್ಕಾರಿ ಜಮೀನನ್ನು ಉಚಿತವಾಗಿ ಹಂಚಿಕೆ ಮಾಡಲು ತಿಳಿಸಲಾಗಿದೆ.

2. ಮೇಲೆ ಓದಲಾದ 2ರಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ, ವಿಶೇಷ ಕರ್ತವ್ಯಾಧಿಕಾರಿ, ಬೆಳಗಾಂವ್ ಇವರು ಕಾವೇರಿ ಕಾಡಾ ಮೈಸೂರು ಆಡಳಿತಾಧಿಕಾರಿಯವರಿಗೆ ಪತ್ರ ಬರೆದು ಪ್ರಾಧಿಕಾರದ ಅಧೀನದಲ್ಲಿ ಬರುವ ಸಾತನೂರು ಫಾರಂನಲ್ಲಿರುವ 80 ಎಕರೆ ಜಮೀನು ಮತ್ತು ಕಟ್ಟಡಗಳನ್ನು ಸದರಿ ಮಂಡ್ಯ ಕೇಂದ್ರ ಸ್ಥಾಪನೆಗೆ ಬಿಟ್ಟುಕೊಡಲು ಕೋರಿರುತ್ತಾರೆ. ಮುಂದುವರೆದು ಮೇಲೆ ಓದಲಾದ 3ರ ಪತ್ರದಲ್ಲಿ ಸಂಸ್ಥೆಯು ಹಮ್ಮಿಕೊಳ್ಳಲಿರುವ ಕಾರ್ಯಚಟುವಟಿಕೆಗಳ ಬಗ್ಗೆ ವಿವರಿಸಿ ಸಾತನೂರು ಫಾರ್ಮ್‌ನಲ್ಲಿರುವ ಕನಿಷ್ಟ 50 ಎಕರೆ ಜಮೀನು ಹಾಗೂ ಕೆಲವು ಮುಖ್ಯ ಕಟ್ಟಡಗಳನ್ನು ವಹಿಸಿಕೊಡಲು ಕೋರಿರುತ್ತಾರೆ.

3. ಕಾವೇರಿ ಕಾಡಾ, ಮೈಸೂರು ಆಡಳಿತಾಧಿಕಾರಿಯವರು ಮೇಲೆ ಓದಲಾದ 4ರ ತಮ್ಮ ಪತ್ರದಲ್ಲಿ ಪ್ರಾಧಿಕಾರದ ವಶದಲ್ಲಿರುವ ಸಾತನೂರು ಫಾರ್ಮ್‌ನಲ್ಲಿರುವ ಒಟ್ಟು 84.19 ಎಕರೆ ಜಮೀನು ಇದ್ದು, ಅದರಲ್ಲಿ ತೋಟಗಾರಿಕೆ ಬೆಳೆಗಳು ಆವರಿಸಿರುವ ವಿಸ್ತೀರ್ಣ 33.10 ಎಕರೆ, ತರಿ ಜಮೀನು 31.08 ಎಕರೆ, ಕಟ್ಟಡಗಳು 05.21 ಎಕರೆ ಹಾಗೂ ಒತ್ತುವರಿ ಜಮೀನು 14.20 ಎಕರೆ ಇರುವುದಾಗಿ, ಅದರಲ್ಲಿ ಫಾರ್ಮ್‌ನಲ್ಲಿರುವ ತೋಟಗಾರಿಕಾ ಕ್ಷೇತ್ರ ಕಟ್ಟಡಗಳು ಮತ್ತು ರಸ್ತೆಗಳನ್ನು ಹೊರತುಪಡಿಸಿದರೆ 31.08 ಎಕರೆ ಪ್ರದೇಶ ಮಾತ್ರ ಕಬ್ಬು ಬೆಳೆಯುವ ವಿಸ್ತೀರ್ಣವು ಲಭ್ಯವಾಗುತ್ತದೆ ಎಂದು ತಿಳಿಸಿರುತ್ತಾರೆ.

4. ಕಾವೇರಿ ಕಾಡಾ. ಮೈಸೂರು ಪ್ರಾಧಿಕಾರಕ್ಕೆ ಸಾತನೂರು ಫಾರಂನಲ್ಲಿರುವ ಸದರಿ ಆಸ್ತಿಯ ಮೇಲೆ ಓದಲಾದ 5ರ ಸರ್ಕಾರದ ಆದೇಶದಂತೆ ಕೃಷಿ ಮತ್ತು ತೋಟಗಾರಿಕೆ ಇಲಾಖೆಯಿಂದ ಹಸ್ತಾಂತರಿಸಲಾಗಿದೆ. ಇದನ್ನು 7ನೇ ಪಂಚವಾರ್ಷಿಕ ಯೋಜನೆಗಳನ್ನು ಅಂತಿಮಗೊಳಿಸುವ ಸಂಬಂಧದಲ್ಲಿ ಕ್ರಮ ಜರುಗಿಸಲಾಗಿತ್ತು, ಪ್ರಸ್ತುತ ಈ ಆಸ್ತಿಯನ್ನು ಕರ್ನಾಟಕ ಸಕ್ಕರೆ ಸಂಸ್ಥೆಗೆ ಬಿಟ್ಟುಕೊಡಲು ಕರ್ನಾಟಕ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾಯ್ದೆ 1980ರ ಸೆಕ್ಷನ್ 3(2)ರ ಪ್ರಕಾರ ದಿನಾಂಕ 28.6.2004 ರಂದು ಪ್ರಾಧಿಕಾರದ 72ನೇ ಸಭೆಯಲ್ಲಿ ರೈತ ಸಮುದಾಯಕ್ಕೆ ಅನುಕೂಲವಾಗುವ ದೃಷ್ಟಿಯಿಂದ 25 ರಿಂದ 30 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಕೆಳಕಂಡ ಷರತ್ತಿನೊಂದಿಗೆ ನೀಡಲು ತೀರ್ಮಾನಿಸಲಾಗಿದೆ ಎಂದು ಮೇಲೆ ಓದಲಾದ-6ರ ಆಡಳಿತಾಧಿಕಾರಿಯವರ ಪತ್ರದಲ್ಲಿ ತಿಳಿಸಿರುತ್ತಾರೆ.

(1) ಸಾತನೂರು ಫಾರಂನಲ್ಲಿ ಲಭ್ಯವಿರುವ ಜಮೀನಿನ ಪೈಕಿ 25 ರಿಂದ 30 ಎಕರೆ ಜಮೀನನ್ನು ಕರ್ನಾಟಕ ಸಕ್ಕರೆ ಸಂಸ್ಥೆಗೆ 29 ವರ್ಷಗಳ ಕಾಲ ಗುತ್ತಿಗೆ ಆಧಾರದ ಮೇಲೆ ಪ್ರತಿ ಎಕರೆಗೆ ಪ್ರತಿ ವರ್ಷಕ್ಕೆ ರೂ. 10,000-00 ಗುತ್ತಿಗೆ ದರವನ್ನು ನಿಗದಿಪಡಿಸಿ ಗುತ್ತಿಗೆ ನೀಡುವುದು.

(2) ಕರ್ನಾಟಕ ಸಕ್ಕರೆ ಸಂಸ್ಥೆಯು ಅವರ ಆಡಳಿತ ಮಂಡಳಿಗೆ ಕಾಡಾ ಅಧ್ಯಕ್ಷರನ್ನು ನಿರ್ದೇಶಕರನ್ನಾಗಿ ನೇಮಕ ಮಾಡಿಕೊಳ್ಳುವುದು.

(3) ಪ್ರಾಧಿಕಾರದಿಂದ ಹಸ್ತಾಂತರಿಸಿದ ಜಮೀನನ್ನು ಯಾವುದೇ ಕಾರಣಕ್ಕೂ ಸಕ್ಕರೆ ಸಂಸ್ಥೆಯವರು ಬೇರೆ ಯಾವುದೇ ವ್ಯಕ್ತಿ : ಸಂಘ : ಸಂಸ್ಥೆಗಳಿಗೆ ಮಾರಾಟ ಅಥವಾ ಗುತ್ತಿಗೆ ಆಧಾರದ ಮೇಲೆ ನೀಡಬಾರದು.

(4) ಸದರಿ ಜಮೀನನ್ನು ಸಕ್ಕರೆ ಸಂಸ್ಥೆಯು ಉದ್ದೇಶಿತ ಸಂಶೋಧನೆಗೆ ಉಪಯೋಗಿಸದೇ ಇದ್ದ ಪಕ್ಷದಲ್ಲಿ ಹಸ್ತಾಂತರಿಸಿದ ಜಮೀನನ್ನು ಪ್ರಾಧಿಕಾರವು ಯಾವುದೇ ಸಂದರ್ಭದಲ್ಲಿ ಹಿಂದಕ್ಕೆ ಪಡೆಯುವ ಹಕ್ಕನ್ನು ತನ್ನಲ್ಲಿ ಉಳಿಸಿಕೊಂಡಿರುತ್ತದೆ.

ಮೇಲಿನ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 55 ಸಿಎಕೆ 2003, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕಾವೇರಿ ಜಲಾನಯನ ಯೋಜನೆ, ಮೈಸೂರು ಕಾಡಾ ಪ್ರಾಧಿಕಾರದ ಅಧೀನದಲ್ಲಿ ಬರುವ ಮಂಡ್ಯ ಜಿಲ್ಲೆಯ ಸಾತನೂರು ಫಾರಂನಲ್ಲಿನ 30.00 ಎಕರೆ ಜಮೀನನ್ನು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂವ್ ಇವರಿಗೆ ರೈತ ಸಮುದಾಯಕ್ಕೆ ಅನುಕೂಲವಾಗುವಂತೆ ಉಪ ಕೇಂದ್ರವನ್ನು ಸ್ಥಾಪನೆ ಮಾಡಲು ಕೆಳಕಂಡ ಷರತ್ತಿಗೆ ಒಳಪಟ್ಟು 29 ವರ್ಷದವರೆಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಮಂಜೂರಾತಿಯನ್ನು ನೀಡಲಾಗಿದೆ.

(1) ಸಾತನೂರು ಫಾರನಲ್ಲಿ ಲಭ್ಯವಿರುವ ಜಮೀನಿನ ಪೈಕಿ 30 ಎಕರೆ ಜಮೀನನ್ನು ಕರ್ನಾಟಕ ಸಕ್ಕರೆ ಸಂಸ್ಥೆಗೆ 29 ವರ್ಷಗಳ ಕಾಲ ಪ್ರತಿ ಎಕರೆಗೆ ಪ್ರತಿ ವರ್ಷಕ್ಕೆ ರೂ. 10,000-00 ರಂತೆ (ಹತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಪ್ರತಿ ಮೂರು ವರ್ಷಕ್ಕೆ ಶೇ. 10 ರಷ್ಟು ದರ ಹೆಚ್ಚಳ ಮಾಡುವ ಷರತ್ತಿಗೆ ಒಳಪಟ್ಟು ಗುತ್ತಿಗೆ ನೀಡುವುದು.

(2) ಕರ್ನಾಟಕ ಸಕ್ಕರೆ ಸಂಸ್ಥೆಯು ಅವರ ಆಡಳಿತ ಮಂಡಳಿಗೆ ಕಾವೇರಿ ಕಾಡಾ ಅಧ್ಯಕ್ಷರನ್ನು ಅಧಿಕಾರೇತರ ನಿರ್ದೇಶಕರನ್ನಾಗಿ ನೇಮಕ ಮಾಡಿಕೊಳ್ಳುವುದು.

(3) ಪ್ರಾಧಿಕಾರದಿಂದ ಹಸ್ತಾಂತರಿಸಿದ ಜಮೀನನ್ನು ಯಾವುದೇ ಕಾರಣಕ್ಕೂ ಸಕ್ಕರೆ ಸಂಸ್ಥೆಯವರು ಬೇರೆ ಯಾವುದೇ ವ್ಯಕ್ತಿ : ಸಂಘ : ಸಂಸ್ಥೆಗಳಿಗೆ ಮಾರಾಟ ಅಥವಾ ಗುತ್ತಿಗೆ ಆಧಾರದ ಮೇಲೆ ನೀಡತಕ್ಕುದಲ್ಲ.

(4) ಸದರಿ ಜಮೀನನ್ನು ಸಕ್ಕರೆ ಸಂಸ್ಥೆಯು ಉದ್ದೇಶಿತ ಸಂಶೋಧನೆಗೆ ಉಪಯೋಗಿಸದೇ ಇದ್ದ ಪಕ್ಷದಲ್ಲಿ ಹಸ್ತಾಂತರಿಸಿದ ಜಮೀನನ್ನು ಪ್ರಾಧಿಕಾರ / ಸರ್ಕಾರವು ಯಾವುದೇ ಸಂದರ್ಭದಲ್ಲಿ ಹಿಂದಕ್ಕೆ ಪಡೆಯುವ ಹಕ್ಕನ್ನು ಕಾದಿರಿಸಿಕೊಳ್ಳಲಾಗಿದೆ.

ಈ ಗುತ್ತಿಗೆಗೆ ಅಗತ್ಯವಾದ ಎಲ್ಲಾ ವಿಧಿ-ವಿಧಾನಗಳನ್ನು ಅಂದರೆ ಕರಾರು ಪತ್ರಗಳನ್ನು ಸಕ್ಕರೆ ಸಂಸ್ಥೆಯೊಂದಿಗೆ ಮಾಡಿಕೊಂಡ ನಂತರ ಉದ್ದೇಶಿತ ಕರ್ನಾಟಕ ಸಕ್ಕರೆ ಸಂಸ್ಥೆಯ ಉಪ ಕೇಂದ್ರ ವಶಕ್ಕೆ ನೀಡಲು ಕಾವೇರಿ ಕಾಡಾ, ಮೈಸೂರು ಆಡಳಿತಾಧಿಕಾರಿಯವರಿಗೆ ನಿರ್ದೇಶಿಸಲಾಗಿದೆ. ಅಲ್ಲದೆ ಅದರಲ್ಲಿ ಒಟ್ಟು 30.00 ಎಕರೆ ಜಮೀನಿಗೆ ಸಂಬಂಧಿಸಿದ ಸರ್ವೆ ನಂಬರುಗಳನ್ನು ಗುರುತಿಸತಕ್ಕದ್ದು.

ಈ ಆದೇಶವನ್ನು ಕಂದಾಯ ಇಲಾಖೆಯ ಸಹಮತಿ ಹಾಗೂ ಲೋಕೋಪಯೋಗಿ ಇಲಾಖೆಯ ಆರ್ಥಿಕ ಕೋಶದ ದಿನಾಂಕ 27.11.2004ರ ಟಿಪ್ಪಣಿ ಸಂಖ್ಯೆ ಲೋಇ 691 ಆಕೋ-3 /2004 ಸಹಮತಿಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 5

**ಕೆ. ವಾಸುದೇವ ಹೆಬ್ಬಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಕಾಡಾ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಗದಗ್ ಜಿಲ್ಲೆ ಮುಂಡರಗಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದ ಉಗ್ರಾಣ ಸಾಮಗ್ರಿಗಳ ಕೊರತೆಗೆ ಕಾರಣರಾದ ಅಭಿಯಂತರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸುವ ಬಗ್ಗೆ - ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಗದಗ್, ಇವರ ಪತ್ರ ಸಂಖ್ಯೆ:ಜಿಪಂಗ:ಸಿಬ್ಬಂದಿ:ಇವಿ:ಜಿಬಿ:ನಂದಿ:ವಹಿ:102:3:4678, ದಿ:25.2.2004.
2. ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಮತ್ತು ಎಂ.ವಿ. ರಾಜಶೇಖರ್, ಸಹಾಯಕ ಇಂಜಿನಿಯರ್, ಇವರುಗಳಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿಗೊಳಿಸಿದ್ದ ಕಾರಣ ಕೇಳುವ ನೋಟೀಸ್ ಸಂಖ್ಯೆ:ಗ್ರಾಅಪ 21 ಇಎನ್‌ಕ್ಯೂ 2004, ದಿ:31.5.2004.
3. ಶ್ರೀ ಎಂ.ವಿ. ರಾಜಶೇಖರ್ ಮತ್ತು ಶ್ರೀ ಜಿ.ಬಿ. ನಂದಿ ಇವರ ದಿ:28.7.2004ರ ಮತ್ತು 31.7.2004ರ ಲಿಖಿತ ಹೇಳಿಕೆಗಳು.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಗದಗ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ:25.2.2004ರ ಪತ್ರದಲ್ಲಿ ಮುಂಡರಗಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿನ ಕಾಮಗಾರಿಗಳ ಅವ್ಯವಹಾರ, ಎಂಎಎಸ್ ಲೆಕ್ಕ, ಟಿ ಮತ್ತು ಪಿ ಸಾಮಗ್ರಿ ಹಾಗೂ ಉಗ್ರಾಣ ಸಾಮಗ್ರಿಗಳ ಕೊರತೆಗೆ ಕಾರಣರಾದ ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಶ್ರೀ ಎಂ.ವಿ. ರಾಜ್‌ಶೇಖರ್, ಸಹಾಯಕ ಇಂಜಿನಿಯರ್, ಶ್ರೀ ಪಿ.ಬಿ. ಪಾಟೀಲ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಹೆಚ್.ಕೆ. ಹಂಚೀನಾಳ ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಪ್ರಸ್ತಾವನೆಯನ್ನು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ ಇವರಿಗೆ ಕಳುಹಿಸಲಾಗಿದ್ದರೂ ಅವರು ಇದುವರೆವಿಗೂ ಯಾವುದೇ ಕ್ರಮ ಕೈಗೊಳ್ಳದ ಕಾರಣ ಆಪಾದಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಸೂಕ್ತ ನಿರ್ದೇಶನ ನೀಡುವಂತೆ ಕೋರಿರುತ್ತಾರೆ. ಹಾಗೂ ಈ ಸಂಬಂಧ ಆಪಾದಿತರಿಗೆ ಜಾರಿಗೊಳಿಸಬಹುದಾದ ಕರಡು ಆರೋಪ ಪಟ್ಟಿಯ ಪ್ರತಿಯೊಂದನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಪಿ.ಬಿ. ಪಾಟೀಲ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ದಿ:14.2.2000ರಂದು ನಿಧನ ಹೊಂದಿರುವುದರಿಂದ ಮತ್ತು ಶ್ರೀ ಹೆಚ್.ಕೆ. ಹಂಚೀನಾಳ ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ದಿ: 30.9.2002 ರಂದು ನಿವೃತ್ತಿ ಹೊಂದಿರುವುದರಿಂದ ಇವರುಗಳನ್ನು ಹೊರತುಪಡಿಸಿ ಉಳಿದ ಆಪಾದಿತರಾದ ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಶ್ರೀ ಎಂ.ವಿ. ರಾಜಶೇಖರ್, ಸಹಾಯಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಮುಂಡರಗಿ, ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-11ರ ರೀತ್ಯಾ ಜಂಟಿ ಇಲಾಖಾ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂಖ್ಯೆ:(2)ರ ದಿ:31.5.2004ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪ ಪಟ್ಟಿ ಜಾರಿ ಮಾಡಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ:(3)ರ ಪತ್ರಗಳಲ್ಲಿ ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಶ್ರೀ ಎಂ.ವಿ. ರಾಜ್‌ಶೇಖರ್, ಸಹಾಯಕ ಇಂಜಿನಿಯರ್, ಇವರು ಸರ್ಕಾರಕ್ಕೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಾವು ಯಾವುದೇ ಹಣವನ್ನು ದುರುಪಯೋಗಪಡಿಸಿಕೊಂಡಿರುವುದಿಲ್ಲವೆಂದು ತಿಳಿಸುತ್ತಾ ತಮ್ಮ ಮೇಲಿನ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಆದರೆ, ಸದರಿಯವರ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಲಾಗಿ ಅವು ಸಮರ್ಪಕವಾಗಿಲ್ಲವೆಂದು ಕಂಡುಬಂದಿರುವುದರಿಂದ ಮತ್ತು ಆಪಾದಿತ ಅಧಿಕಾರಿ:ನೌಕರರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬರುವುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶವನ್ನರಿಯಲು ಪ್ರಕರಣದಲ್ಲಿ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 21 ಇಎನ್‌ಕ್ಯೂ 2004, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಬಿ. ನಂದಿ, ಅಂದಿನ ಕಿರಿಯ ಇಂಜಿನಿಯರ್ ಮತ್ತು ಶ್ರೀ ಎಂ.ವಿ. ರಾಜ್‌ಶೇಖರ್, ಅಂದಿನ ಸಹಾಯಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮುಂಡರಗಿ, ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-11ರಲ್ಲಿ ನಿಗದಿಪಡಿಸಲಾದ ವಿಧಿವಿಧಾನಗಳ ಅನ್ವಯ ನಿಯಮ-13ರಂತೆ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ-11 (2)ರ ರೀತ್ಯಾ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ನಂ.239/1, ನಾಗಶ್ರೀ, 4ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು-18, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿಚಾರಣೆ ನಡೆಸಿ 3 ತಿಂಗಳೊಳಗಾಗಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು. ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ ನಂತರ ರೂ.5000-00 ಗಳ ಸಂಭಾವನೆ ಹಾಗೂ ರೂ.1000-00 ಗಳ ವಾಹನ ಭತ್ಯೆ ಮಂಜೂರು ಮಾಡಲಾಗುವುದು.

ವಿಚಾರಣಾಧಿಕಾರಿಗಳು ಈ ವಿಚಾರಣೆಯನ್ನು ಗದಗ್ ಜಿಲ್ಲಾ ಪಂಚಾಯತ್‌ನ ಕಚೇರಿಯಲ್ಲಿ ನಡೆಸಲು ಅವರಿಗೆ ಸೂಕ್ತ ಸ್ಥಳಾವಕಾಶ, ಲೇಖನ ಸಾಮಗ್ರಿ ಇನ್ನಿತರೇ ಸೌಲಭ್ಯವನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ಇವರು ಒದಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 6

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.